ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 05 ನೇ ಫೆಬ್ರುವರಿ, 2021

ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ನೇಮಕಾತಿ ಹಾಗೂ ಸೇವೆಯ ಕುರಿತು

ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

498 (589) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಪರಿಷ್ಕೃತ ಜೇಷ್ಠತಾ ಪಟ್ಟಿಯನ್ನು ಸರ್ಕಾರ ತಯಾರು ಮಾಡಿದೆಯೇ; (ಪಟ್ಟಿಯನ್ನು ನೀಡುವುದು)

(ಆ) ಪಿ.ಡಿ.ಓ.ಗಳ ನೇಮಕಾತಿಗೆ ಸಂಬಂಧಪಟ್ಟಂತೆ, ತಾತ್ಕಾಲಿಕ ಆಯ್ಕೆ ಪಟ್ಟಿ ಹಾಗೂ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸದಿರಲು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಹಾಗೂ ಹೈಕೋರ್ಟ್ ತಡೆಯಾಜ್ಞೆ ನೀಡಿದೆಯೇ; (ಆದೇಶದ ಪ್ರತಿಗಳನ್ನು ನೀಡುವುದು)

(ಇ) ಪಿ.ಡಿ.ಓ.ಗಳ (ನೇರ ನೇಮಕಾತಿ) ಅಂತಿಮ ಆಯ್ಕೆ ಪಟ್ಟಿಯನ್ನು ಒಂದೇ ದಿನಾಂಕದಂದು ಪ್ರಕಟಿಸುವ ಬಗ್ಗೆ ಸರ್ಕಾರ ತೀರ್ಮಾನಿಸಿದ ಬಗ್ಗೆ ದಾಖಲೆ ನೀಡುವುದು;

(ಈ) ರದ್ದಾದ ಹಿಂದಿನ ವಿಸ್ತರಣಾಧಿಕಾರಿಗಳ ಸೇವಾ ಅವಧಿಯನ್ನು ಪರಿಗಣಿಸಿ ಪಿ.ಡಿ.ಓ. ಗಳ ಜೇಷ್ಠತಾ ಪಟ್ಟಿಯಲ್ಲಿ ಮೇಲಿನ ಸ್ಥಾನ ನೀಡಲು ಅವಕಾಶ ಕಲ್ಪಿಸಲು ಕ್ರಮ ಕೈಗೊಳ್ಳಲಾಗಿದೆಯೇ; (ನೇಮಕಾತಿ ನಿಯಮ, ಸರ್ಕಾರ ಆದೇಶ ಅಥವಾ ಕಾಯ್ದೆ ಹಾಗೂ ನ್ಯಾಯಾಲಯದ ಆದೇಶಗಳು ಇದ್ದಲ್ಲಿ, ಒದಗಿಸುವುದು)

(ಉ) ಪಿ.ಡಿ.ಓ. ಸಹಾಯಕ ನಿರ್ದೇಶಕರು ಮತ್ತು ಕಾರ್ಯನಿರ್ವಾಹಕ ಅಧಿಕಾರಿಗಳ ಜೇಷ್ಠತಾ ಪಟ್ಟಿ ಮತ್ತು ಪದೋನ್ನತಿಗೆ ಸಂಬಂಧಪಟ್ಟಂತೆ, ಯಾವುದಾದರೂ ನ್ಯಾಯಾಲಯಗಳಲ್ಲಿ ಪ್ರಕರಣಗಳು ದಾಖಲಾಗಿದೆಯೇ? (ಪ್ರಕರಣಗಳ ಸಂಖ್ಯೆ ಮತ್ತು ದಾಖಲೆಗಳ ಸಹಿತ ಮಾಹಿತಿ ನೀಡುವುದು)